# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **337**

ಸದಸ್ಯರ ಹೆಸರು : ಶ್ರೀ ಲಹರ್ ಸಿಂಗ್ ಸಿರೋಯಾ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 10-12-2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಸಾರಿಗೆ ಸೆಸ್ ವಿಧಿಸುವ ಪ್ರಸ್ತಾಪ ಸರ್ಕಾರದ ಮುಂದಿದೆಯೇ; | ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಕಾಯ್ದೆ 1957ರ, ಕಲಂ 3 ರನ್ವಯ ರಾಜ್ಯದಲ್ಲಿ ನೋಂದಣಿಯಾಗುವ ಎಲ್ಲಾ ತರಹದ ವಾಹನಗಳ ಮೌಲ್ಯ ಆಧಾರದ ಮೇಲೆ ಆಕರಣೆ ಮಾಡುವ ತೆರಿಗೆಯ ಜೊತೆ ಸದರಿ ಕಾಯ್ದೆಯ ಕಲ 3(ಎ) ಈ ಕೆಳಕಂಡಂತೆ ವ್ಯಾಖ್ಯಿನಿಸಲಾಗಿರುತ್ತದೆ:-<br><br>**<u>ಕಲಂ 3(ಎ):</u>** ಕೇಂದ್ರ ಮೋಟಾರು ವಾಹನಗಳ ಕಾಯ್ದೆ 1988 (ಕೇಂದ್ರ ಕಾಯ್ದೆ 59-1988) ರನ್ವಯ ನೋಂದಾಯಿಸುವ ವಾಹನಗಳಿಗೆ ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಕಾಯ್ದೆ 1957, ಕಲಂ 3 ರಂತೆ ವಿಧಿಸುವ ತೆರಿಗೆ ಮೆಲೆ ಶೇಕಡ 11% ಸೆಸ್ ವಿಧಿಸಲು ಮತ್ತು ವಸೂಲು ಮಾಡಲು ಅವಕಾಶವಿರುತ್ತದೆ. ತೆರಿಗೆ ಮೇಲೆ ವಿಧಿಸುವ ಶೇಕಡ 11% ಸೆಸ್ ರಲ್ಲಿ ಶೇಕಡ 10 ಅನ್ನು ರಾಜ್ಯದಲ್ಲಿನ ವಿವಿಧ ಮೂಲಸೌಕರ್ಯ ಯೋಜನೆಗಳಿಗೆ, ಬೆಂಗಳೂರು ಮಾಸ್ ರಾಪಿಡ್ ಟ್ರ್ಯಾಸಿಟ್ ಸಿಸ್ಟಂ ಲಿ, ಮಾನ್ಯ ಮುಖ್ಯ ಮಂತ್ರಿಗಳ ಗ್ರಾಮೀಣ ರಸ್ತೆ ಅಭಿವೃದ್ಧಿ ನಿಧಿಗೆ 57:28:15 ಪ್ರಮಾಣದಲ್ಲಿ ಮತ್ತು ಶೇಕಡ 1 ಅನ್ನು ನಗರ ಸಾರಿಗೆ ನಿಧಿಯೆಂದು ಸಂಗ್ರಹಿಸಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ವಿಧಿಸಲಾಗುವ ಸಾರಿಗೆ ಸೆಸ್‌ನ ಪ್ರಮಾಣವೆಷ್ಟು; | ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಕಾಯ್ದೆ 1957ರ ಕಲಂ 3(ಎ) ರನ್ವಯ ವಿಧಿಸುವ ಶೇಕಡ 11% ಸೆಸ್‌ನಲ್ಲಿ ಶೇಕಡ 1% ಸೆಸ್ ನಗರ ಸಾರಿಗೆ ನಿಧಿಯ ಲೆಕ್ಕ ಶೀರ್ಷಿಕೆಯಲ್ಲಿ ಆಕರಣೆ ಮಾಡಲಾಗುತ್ತಿದೆ. |
| ಇ) | ಈ ಯೋಜನೆಯನ್ನು ಎಂದಿನಿಂದ ಜಾರಿಗೊಳಿಸಲಾಗುವುದು; | ಕರ್ನಾಟಕ ಮೋಟಾರು ವಾಹನಗಳ ತೆರಿಗೆ (ತಿದ್ದುಪಡಿ) ಕಾಯ್ದೆ, 2011 (ಕರ್ನಾಟಕ ಕಾಯ್ದೆ 17-2011) ರಲ್ಲಿ ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಕಾಯ್ದೆ 1957ರ ಕಲಂ 3(ಎ) ತಿದ್ದುಪಡಿ ಮಾಡಲಾಗಿರುತ್ತದೆ. ಸದರಿ ತಿದ್ದುಪಡಿಯಲ್ಲಿ ಶೇಕಡ 1% ಸೆಸ್ ಅನ್ನು ನಗರ ಸಾರಿಗೆ ನಿಧಿಗಾಗಿ ಮೀಸಲಿಟ್ಟು ದಿನಾಂಕ:01-04-2011 ರಿಂದ ಜಾರಿಗೊಳಿಸಲಾಗಿರುತ್ತದೆ. |

ಟಿಡಿ 124 ಟಿಡಿಕ್ಯೂ 2020

**(ಲಕ್ಷ್ಮಣ ಸಂಗಪ್ಪ ಸವದಿ)**
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು